ಪದಪ್ರಕೃತಿಸ್ವರತ್ವಂ | ಬಹುಲಂ ಛಂದಸೀತಿ ಭಿಸ ಐಸಭಾವಃ | ಅಶ್ವಿನಾ | ಸುಪಾಂ ಸುಲುಗಿತಿ ವಿಭಕ್ತೇ- ರಾಕಾರಃ | ಆಮಂತ್ರಿತಸ್ಯ ಚೇತಿ ಸರ್ವಾನುದಾತ್ತತ್ವಂ | ಸೌಭಗೇಭಿಃ | ಶೋಭನೋ ಭಗಃ ಶ್ರೀರ್ಯಸ್ಯಾಸೌ ಸುಭಗಃ | ತಸ್ಯ ಭಾವಃ ಸೌಭಗಂ | ಸುಭಗಾನ್ಮಂತ್ರೆ ಇತ್ಯುದ್ಗಾತ್ರಾದಿಷು ಪಾಠಾದಞ್ಪ್ರತ್ಯಯಃ | ಹೃದ್ಭ- ಗಸಿಂಧ್ವಂತೇ ಪೂರ್ವಪದಸ್ಯ ಚೇತ್ಯುಭಯಪದವೃದ್ಧಿರ್ನ ಭವತಿ ತಸ್ಯ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೆ ಇತಿ ವಿಕಲ್ಪಿತತ್ವಾತ್ | ಪೂರ್ವವದೈಸಭಾವಃ | ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ ||

### ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ | **ದ್ಯುಭಿಃ**—ಹಗಲು ಕಾಲಗಳಲ್ಲೂ | **ಅಕ್ತುಭಿಃ**— ರಾತ್ರಿಕಾಲ ಗಳಲ್ಲೂ | **ಅಸ್ಮಾನ್**—ಭಕ್ತರಾದ ನಮ್ಮನ್ನು | **ಅರಿಷ್ಟೇಭಿಃ**— ಅಹಿಂಸಿತವಾದವೂ | **ಸೌಭಗೇಭಿಃ**—ಮಂಗಳಾತ್ಮಕ ವಾದವೂ ಆದ ಧನಗಳಿಂದ | **ಪರಿ ಪಾತಂ**— ಪ್ರೀತಿಯಿಂದ ಚೆನ್ನಾಗಿ ಪಾಲಿಸಿರಿ | **ನಃ** — ನಮ್ಮ | **ತತ್**— ಈ ಪ್ರಾರ್ಥನೆಯನ್ನು | **ಮಿತ್ರಃ**—ಮಿತ್ರನೂ | **ವರುಣಃ**—ವರುಣನೂ | **ಅದಿತಿಃ**—ಅದಿತಿಯೂ | **ಸಿಂಧುಃ**— ಸಾಗರಾಧಿದೇವತೆಯೂ | **ಪೃಥಿವೀ**— ಪೃಥಿವಿಯೂ | **ಉತ**—ಮತ್ತು | **ದ್ಯೌಃ**—ದ್ಯುಲೋಕಾಧಿದೇವತೆಯೂ | **ಮಮಹಂತಾಂ**-- ಪೂಜ್ಯವಾದುದನ್ನಾಗಿಮಾಡಿ ರಕ್ಷಿಸಲಿ.

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಹಗಲುಕಾಲಗಳಲ್ಲೂ ಮತ್ತು ರಾತ್ರಿಕಾಲಗಳಲ್ಲೂ ಭಕ್ತರಾದ ನಮ್ಮನ್ನು ಮಂಗಳಾತ್ಮಕವಾದವೂ ಅಹಿಂಸಿತವಾದವೂ ಆದ ಧನಗಳ ದಾನದಿಂದಲೂ ಅನುಗ್ರಹದಿಂದಲೂ ಚೆನ್ನಾಗಿ ಪಾಲಿಸಿರಿ. ನಮ್ಮ ಈ ಪ್ರಾರ್ಥನೆಯನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥಿವಿಯೂ ಮತ್ತು ದ್ಯುಲೋಕಾಧಿದೇವತೆಯೂ ಸಹ ಪೂಜ್ಯವಾದುದನ್ನಾಗಿಮಾಡಿ ರಕ್ಷಿಸಲಿ-

### Englih Translation

Cherish us, Aswins, always, by night or day, with undiminished blessings ; and may Mitra, Varuna, Aditi,—ocean, earth, and heaven, be favourable to this our (prayer)·

### ವಿಶೇಷವಿಷಯಗಳು

**ಅಕ್ತುಭಿಃ**—**ಶ್ಯಾವೀ, ಕ್ಷಪಾ, ಶರ್ವರೀ, ಅಕ್ತುಃ** ಇತ್ಯಾದಿ ೨೩ ರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೧-೧೮) ಅನೇಕ ಕಡೆಗಳಲ್ಲಿ ಅಕ್ತುಶಬ್ದಕ್ಕೆ ಪ್ರಕೃತವಾದ ಋಕ್ಕಿನಲ್ಲಾಗುವಂತೆ ರಾತ್ರಿಯೆಂದೇ ಅರ್ಥ. ಆದರೆ ಕೆಲವು ಸಂದರ್ಭಗಳಲ್ಲಿ ಕಿರಣ, ಆಯುಧ, ಕತ್ತಲು ಇತ್ಯಾದಿ ಅರ್ಥಗಳಲ್ಲೂ ಈ ಶಬ್ದದ ಪ್ರಯೋಗವಿದೆ. ಅಂಜ್ ಧಾತುವಿಗೆ ಆವರಿಸು, ಮುಚ್ಚು ಬಳಿ ಇತ್ಯಾದ್ಯರ್ಥಗಳಿರುವುದರಿಂದ ಛಾಯೆಯಿಂದ ಮುಚ್ಚುವ ಕತ್ತಲೆಯೆಂದೂ, ಸುತ್ತಲೂ ಆವರಿಸತಕ್ಕ ಕಿರಣವೆಂತಲೂ, ಕತ್ತಲೆಯಿಂದ ಮುಚ್ಚುವ ರಾತ್ರಿಯೆಂದೂ ದೇಹವನ್ನು ಆವರಿಸುವ ಆಯುಧ ವೆಂದೂ ಅರ್ಥಗಳು ಆಗುತ್ತವೆ- ಉದಾಹರಣೆಗೆ—

**ಯೋ ಮರ್ತ್ಯಃ ಶಿಶೀತೇ ಅತ್ಯಕ್ತುಭಿರ್ಮಾ ನಃ ಸ ರಿಪುರೀಶತ ।**

(ಋ. ಸಂ. ೧-೩೬-೧೬)

ಎಂಬ ಋಕ್ಕಿನಲ್ಲಿ ಆಯುಧವೆಂದೂ,

**ಶಿರಿಣಾಯಾಂ ಚಿದಕ್ತುನಾ ಮಹೋಭಿರಪರೀವೃತೋ ವಸತಿ ಪ್ರಚೇತಾಃ ।**

(ಋ. ಸಂ. ೨-೧೦-೩)

ಎಂಬ ಋಕ್ಕಿನಲ್ಲಿ **ತಮಸ್ಸೆಂದೂ** ಅರ್ಥಮಾಡಿದ್ದಾರೆ. ಆದರೆ ಈ ಪದವು ರಾತ್ರಿಪರ್ಯಾಯವಾಗಿ ಉಪಯೋಗಿಸಲ್ಪಟ್ಟಿರುವುದೇ ಅಧಿಕವಾಗಿದೆ.

**ಅರಿಷ್ಟೇಭಿಃ**-- **ಅಹಿಂಸಿತೈಃ** । ಹಿಂಸಾರಹಿತವಾದುದೂ ಸುರಕ್ಷಿತವಾದುದೂ ಎಂದರ್ಥ.

**ತನ್ನೋ ಮಿತ್ರೋ ವರುಣೋ ಮಾಮಹಂತಾಂ—ಮಿತ್ರಾದಯಃ ಷಡ್ದೇವತಾಃ ಅಸ್ಮಾಭಿಃ ಪ್ರಾರ್ಥಿತಂ ಪೂಜಯಂತು** ಇತಿ। ಈ ವಾಕ್ಯದ ಅರ್ಥವನ್ನು ಹಿಂದಿನ ಸೂಕ್ತದಲ್ಲಿ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ದ್ಯುಭಿಃ**—ದಿವ್ ಶಬ್ದ. ಇದಕ್ಕೆ ತೃತೀಯಾಬಹುವಚನ ಪರವಾದಾಗ **ದಿವ ಉತ್**—(ಪಾ. ಸೂ. ೭-೧-೧೩೧) ಎಂಬುದರಿಂದ ವಕಾರಕ್ಕೆ ಉತ್ವ. ಯಣಾದೇಶ. **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಪ್ರಾಪ್ತವಾದರೆ **ದಿವೋಝಲ್**—(ಪಾ. ಸೂ. ೬-೧-೧೮೩) ಎಂಬುದರಿಂದ ಪ್ರತಿಷೇಧ ಬರುತ್ತದೆ.

**ಅರಿಷ್ಟೇಭಿಃ**—ರಿಷ ಹಿಂಸಾಯಾಂ. ಧಾತು. **ನಿಷ್ಠಾ**—(ಪಾ. ಸೂ. ೩-೨-೧೦೨) ಸೂತ್ರದಿಂದ ಕ್ತ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟತ್ವ. ನರಿಷ್ಟಃ ಅರಿಷ್ಟಃ ನಞ್ ತತ್ಪುರುಷಸಮಾಸದಲ್ಲಿ **ತತ್ಪುರುಷೇ ತುಲ್ಯಾ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಇದಕ್ಕೆ ಭಿಸ್ ಪರವಾದಾಗ **ಬಹುಲಂ ಛಂದಸಿ**—ಎಂಬುದರಿಂದ ಭಿಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್**—(ಪಾ. ಸೂ. ೭-೩-೧೦೩) ಎಂಬುದರಿಂದ ಏತ್ವ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ.

**ಅಶ್ವಿನಾ**—ದ್ವಿವಚನ ಔ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ

**ಸೌಭಗೇಭಿಃ**—ಶೋಭನೋ ಭಗಃ ಶ್ರೀಃ ಯಸ್ಯ ಅಸೌ ಸುಭಗಃ ತಸ್ಯ ಭಾವಃ ಸೌಭಗಮ್. **ಸುಭಗಾನ್ಮಂತ್ರೇ**—ಎಂದು ಉದ್ಗಾತ್ರಾದಿಗಣದಲ್ಲಿ ಪಠಿತವಾದುದರಿಂದ ಭಾವಾರ್ಥದಲ್ಲಿ ಅಞ್ ಪ್ರತ್ಯಯ. **ಹೃದ್‌ಭಗಸಿಂಧ್ವಂತೇ ಪೂರ್ವಪದಸ್ಯ ಚ**—(ಪಾ. ಸೂ. ೭-೩-೧೯) ಎಂಬುದರಿಂದ ಉಭಯಪದವೃದ್ಧಿಯು ಪ್ರಾಪ್ತವಾದರೆ **ಸರ್ವೇವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ ವಿಕಲ್ಪಿತವಾದುದರಿಂದ ಇಲ್ಲಿ ಬರುವುದಿಲ್ಲ. ಹಿಂದಿನಂತೆ ಭಿಸಿನಲ್ಲಿ ಐಸಾದೇಶ ಬರುವುದಿಲ್ಲ ಅಞ್ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಾತಮ್**— ಪಾ ರಕ್ಷಣೇ. ಧಾತು. ಅದಾದಿ. ಲೋಟ್, ಮಧ್ಯಮಪುರುಷದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಉಳಿದ ಶಬ್ದಗಳು ಹಿಂದೆ ವ್ಯಾಖ್ಯಾತಗಳಾಗಿವೆ. ॥ ೨೫ ॥

ನೂರ ಹನ್ನೆರಡನೆಯ ಸೂಕ್ತವು ಮುಗಿದುದು.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಮಹೀಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಏಳನೆಯ ಅಧ್ಯಾಯವು ಸಮಾಪ್ತವಾದುದು.

———:o:———

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು